


# ಜ್ಯೋತಿಷ ಮಿತ್ರ

ಆನ್ಲೈನ್ ದಿನಪತ್ರಿಕೆ

www.jyothishamithra.com

ಸಂಚಿಕೆ : 1466 02-09-2022 ಶುಕ್ರವಾರ

ಶುಭಕೃತ್ ಸಂವತ್ಸರ ದಕ್ಷಿಣಾಯನ ವರ್ಷಋತು

ಭಾದ್ರಪದಮಾಸ ಶುಕ್ಲಪಕ್ಷ

## ನಿತ್ಯ ಪಂಚಾಂಗ

ತಿಥಿ : ಷಷ್ಠೀ(13:50) ನಕ್ಷತ್ರ : ವಿಶಾಖಾ(23:46)

ರಾಹುಕಾಲ : 10:57 AM - 12:30 PM

ಗುಳಿಕಕಾಲ : 07:52 AM - 09:24 AM

## ಸುಜ್ಞಾನ

ನಮ್ಮ ಕಣ್ಣುಗಳು ಕೊಳೆಯನ್ನು ನೋಡಬಹುದು, ಆದರೆ ನಮ್ಮ ಮನಸ್ಸು ಕೊಳೆಯನ್ನು ನೋಡದಿರಲಿ. ನಮ್ಮ ಕಿವಿಗಳು ಕೆಟ್ಟದ್ದನ್ನು ಕೇಳಬಹುದು, ಆದರೆ ನಮ್ಮ ಮನಸ್ಸು ಕೆಟ್ಟದ್ದನು ಕೇಳದಿರಲಿ.



# ಜಾತಕ ವಿಮರ್ಶೆ
# ಮಾತೃ ವಿಚಾರ ಚಿಂತನೆ

**ಜನನ ದಿನಾಂಕ : 15-09-1967  ಸಮಯ : 5.02 PM**

ಚತುರ್ಥ ಮತ್ತು ಚಂದ್ರರು ದೋಷಪೂರ್ಣರಾದರೆ ಬಾಲ್ಯದಲ್ಲಿ ತಾಯಿಯನ್ನು ಕಳೆದುಕೊಳ್ಳಬೇಕಾಗಬಹುದು. ಬೃಹಜ್ಜಾತಕದ ನಿಷೇಕಾಧ್ಯಾಯದ ಹಾಗೂ ಅನಿಷ್ಟಾಧ್ಯಾಯದ ಶ್ಲೋಕಗಳನ್ನು ಗಮನಿಸಿದಾಗ ಚಂದ್ರನ ಷಷ್ಠಾಷ್ಟಮವ್ಯಯದ ಸ್ಥಿತಿ. ಆತನಿಗುಂಟಾಗುವ

ಪಾಪಕರ್ತರೀಯೋಗ, ಲಗ್ನ ಹಾಗೂ ಚಂದ್ರರಿಂದ ಚತುರಸ್ರ (ಚತುರ್ಥ ಮತ್ತು ಅಷ್ಟಮ)ದ ಪಾಪಗ್ರಹರ ಸ್ಥಿತಿ,ಚಂದ್ರನ ದೌರ್ಬಲ್ಯ ಬಾಲ್ಯದ ಮಾತೃವಿಯೋಗಕ್ಕೆ ಕಾರಣವಾಗುತ್ತದೆ. ಈ ವಿಚಾರದಲ್ಲಿ ಬಾಲಾರಿಷ್ಟ ಹಾಗೂ ಪಂಚಮಾರಿಷ್ಟದ ಕೆಲವು ಯೋಗಗಳನ್ನು ಐದನೇ ಹಾಗೂ ಆರನೇ ಮನೆಯ ವಿಮರ್ಶೆಯ ಸಂದರ್ಭದಲ್ಲಿ ಉಲ್ಲೇಖಿಸಲಾಗಿದೆ.

| | | | |
|---|---|---|---|
| ಶನಿ | ರಾಹು | | |
| ಲಗ್ನ | ರಾಶಿ | | ಶುಕ್ರ |
| ಚಂದ್ರ | | | ರವಿ<br>ಗುರು |
| | ಕುಜ | ಕೇತು | ಬುಧ |

ಮೇಲಿನ ಕುಂಡಲಿಯಲ್ಲಿ ಮಾತೃಕಾರಕ ಚಂದ್ರನು ಷಷ್ಠಾಧಿಪತಿಯಾಗಿ ವ್ಯಯದಲ್ಲಿ ಶನಿಕ್ಷೇತ್ರದಲ್ಲಿರುವನು. ಮಾತೃಸ್ಥಾನವಾದ ಚತುರ್ಥಕ್ಕೆ ಕುಜ-ಶನಿಗಳ ದೃಷ್ಟಿ ಇದೆ. ಚತುರ್ಥಾಧಿಪತಿ ಶುಕ್ರನು ಷಷ್ಠದಲ್ಲಿ ಭೃಗುಷಷ್ಠದೋಷ ಉಂಟಾಗಿದೆ. ಮಾತೃಕಾರಕ ಚಂದ್ರನಿಗೆ ಚತುರ್ಥದಲ್ಲಿ ರಾಹುವಿರುವನು.

| | | | |
|---|---|---|---|
| ಶುಕ್ರ | ಗುರು | | ಚಂದ್ರ ಬುಧ ರಾಹು |
| ಲಗ್ನ | ನವಾಂಶ | | |
| | | | |
| ರವಿ ಕೇತು | ಶನಿ | ಕುಜ | |

ನವಾಂಶ ಕುಂಡಲಿಯಲ್ಲಿ ಮಾತೃಕಾರಕ ಚಂದ್ರನಿಗೆ

ರಾಹುಯೋಗ ರವಿದೃಷ್ಟಿ ಉಂಟಾಗಿದೆ.ಲಗ್ನದಿಂದ ಚತುರ್ಥಕ್ಕೆ ಶನ್ಯಂಗಾರಕ ದೃಷ್ಟಿ ಇದೆ. ಚತುರ್ಥಾಧಿಪತಿ ಶುಕ್ರನು ಉಚ್ಚನಾಗಿದ್ದು ಬಲಿಷ್ಠನಾಗಿರುವುದು ಶುಭವೇ. ಆದರೆ ಮಾತೃಕಾರಕ ಚಂದ್ರನು ಅಷ್ಟಮಾಧಿಪತಿಯ ನವಾಂಶದಲ್ಲಿರುವುದು ಅಶುಭ.

ಹೀಗಾಗಿ ಜಾತಕನ ತಾಯಿಯು ರಾಹುದಶಾ ಕೇತುಭುಕ್ತಿಯ ಕಾಲದಲ್ಲಿ ಮರಣವನ್ನು ಹೊಂದಿದಳು. ರಾಶಿ ಕುಂಡಲಿಯಲ್ಲಿ ಚಂದ್ರನಿಂದ ಮಾತೃಸ್ಥಾನದ ರಾಹುಸ್ಥಿತಿ ನವಾಂಶಕುಂಡಲಿಯಲ್ಲಿ ಚಂದ್ರನಿಗಿರುವ ರಾಹುಯುತಿಯನ್ನು ಗಮನಿಸಬಹುದು.




ಪೆಂಡ್ಯೂಲಮ್ ಡೌಸಿಂಗ್ ತರಬೇತಿ ಕಿಟ್ ಲಭ್ಯವಿದೆ.

ಆಸಕ್ತರು ಸಂಪರ್ಕಿಸಿ : 9986671473



# ದ್ವಿವಿವಾಹ ಯೋಗ

1. ಸಪ್ತಮಾಧಿಪತಿ ಎಂಟು ಅಥವಾ ಹನ್ನೆರಡನೇ ಮನೆಯಲ್ಲಿದ್ದರೆ ದ್ವಿವಿವಾಹ ಯೋಗ ಇರುತ್ತದೆ.

2. ಸಪ್ತಮ ಸ್ಥಾನಾಧಿಪತಿ ಮತ್ತು ಶುಕ್ರ ಸೇರಿ, ಪಾಪಗ್ರಹಗಳ ಜೊತೆಗಿದ್ದರೆ ದ್ವಿವಿವಾಹ ಯೋಗ ಇರುತ್ತದೆ.

3. ಸಪ್ತಮ ಸ್ಥಾನದಿಂದ ಎಂಟನೇ ಮನೆಯಲ್ಲಿ ಕುಜ ಇದ್ದರೆ ಎರಡನೇ ವಿವಾಹ ಇರುತ್ತದೆ.




# ಕೇವಲ 1 ವಾರದಲ್ಲಿ

## ಪೆಂಡ್ಯೂಲಂ ಡೌಸಿಂಗ್ ಕಲಿಯಿರಿ

• ವೈಯಕ್ತಿಕ ಭವಿಷ್ಯ • ಆರೋಗ್ಯ • ಉದ್ಯೋಗ
• ಪ್ರೀತಿ - ಪ್ರೇಮ • ಅದೃಷ್ಟ ರತ್ನ • ಅದೃಷ್ಟ ದೇವತೆ
• ವೈವಾಹಿಕ ಸಂಬಂಧ • ಹಣಕಾಸು ವ್ಯವಹಾರ

ಭವಿಷ್ಯ ತಿಳಿಯಲು, ಜಲ ಶೋಧನೆ ಮಾಡಲು, ಆತ್ಮಗಳೊಂದಿಗೆ ಸಂಪರ್ಕ ಸಾಧಿಸಲು, ವಾಸ್ತು ತಿಳಿಯಲು, ಅನಾರೋಗ್ಯದಿಂದ ಮುಕ್ತಿ ಹೊಂದಲು ಕಲಿಯಿರಿ ಪೆಂಡ್ಯೂಲಂ ಡೌಸಿಂಗ್.






**Call : 9986671473, 9535283535**

**www.jyothishamithra.com**

4. ಅಷ್ಟಮಾಧಿಪತಿ ಲಗ್ನದಲ್ಲಿದ್ದು, ಸಪ್ತಮಾಧಿಪತಿ ಆರರಲ್ಲಿದ್ದು ಅಥವಾ ಪಾಪಗ್ರಹ ಸಂಯೋಗ ಹೊಂದಿದ್ದರೆ ಅಥವಾ ಅಷ್ಟಮಾಧಿಪತಿ ಮತ್ತು ಷಷ್ಟಮಾಧಿಪತಿ ಮೇಲೆ ಪಾಪಗ್ರಹ ವೀಕ್ಷಣೆ ಇದ್ದರೆ ದ್ವಿವಿವಾಹ ಯೋಗ ಇರುತ್ತದೆ.

5. ಮೂರು ಪಾಪಗ್ರಹಗಳ ಸಂಯೋಗ ಸಪ್ತಮ ಸ್ಥಾನದಲ್ಲಿದ್ದರೆ ದ್ವಿವಿವಾಹ ಯೋಗ ಇರುತ್ತದೆ.

6. ಲಗ್ನಾಧಿಪತಿ ಮತ್ತು ಸಪ್ತಮಾಧಿಪತಿ ಹಾಗೂ ಶುಕ್ರನು ಸೇರಿ ದ್ವಿಸ್ವಭಾವ ರಾಶಿಗಳಲ್ಲಿ ಇದ್ದರೆ ದ್ವಿವಿವಾಹ ಯೋಗ ಇರುತ್ತದೆ.

7. ರಾಹು ದ್ವಿತೀಯ ಸ್ಥಾನದಲ್ಲಿದ್ದು, ಸಪ್ತಮದಲ್ಲಿ ಕುಜನಿದ್ದು, ಶುಕ್ರನ ಮೇಲೆ ಪಾಪಗ್ರಹ ವೀಕ್ಷಣೆ ಇದ್ದರೆ ಅಥವಾ ಪಾಪಗ್ರಹ ಸಂಯೋಗ ಇದ್ದರೆ ದ್ವಿವಿವಾಹ ಯೋಗ ಇರುತ್ತದೆ.

10. ಲಗ್ನಾಧಿಪತಿ ತೃತೀಯ ಅಥವಾ ಆರನೇ

ಸ್ಥಾನದಲ್ಲಿದ್ದರೆ ದ್ವಿವಿವಾಹ ಯೋಗ ಇರುತ್ತದೆ.

11. ಅಷ್ಟಮಾಧಿಪತಿ ಲಗ್ನದಲ್ಲಿ ಅಥವಾ ಸಪ್ತಮದಲ್ಲಿದ್ದರೆ ದ್ವಿವಿವಾಹ ಯೋಗ ಇರುತ್ತದೆ.

12. ಧನಾಧಿಪತಿ ಆರನೇ ಸ್ಥಾನದಲ್ಲಿದ್ದು ಮತ್ತು ಸಪ್ತಮ ಸ್ಥಾನದಲ್ಲಿ ಪಾಪಗ್ರಹ ಇದ್ದರೆ ದ್ವಿವಿವಾಹ ಯೋಗ ಇರುತ್ತದೆ.

13. ಲಗ್ನದಲ್ಲಿ ಕುಜ ಗ್ರಹ ಇದ್ದು ಸಪ್ತಮಾಧಿಪತಿ ಷಷ್ಠದಲ್ಲಿ ಅಥವಾ ವ್ಯಯಭಾವದಲ್ಲಿ ಪಾಪಗ್ರಹಗಳ ಸಂಯೋಗ ಹೊಂದಿದ್ದರೆ ದ್ವಿವಿವಾಹ ಯೋಗ ಇರುತ್ತದೆ.

14. ಸಪ್ತಮಾಧಿಪತಿ ಪಾಪಗ್ರಹದ ಜೊತೆಗಿದ್ದು ಮತ್ತು ಸಪ್ತಮಾಧಿಪತಿ ಮೇಲೆ ಪಾಪಗ್ರಹ ವೀಕ್ಷಣೆ ಇದ್ದರೆ ದ್ವಿವಿವಾಹ ಯೋಗ ಇರುತ್ತದೆ.

ನಿಮ್ಮ ನೆಚ್ಚಿನ ಜ್ಯೋತಿಷ ಮಿತ್ರ ದಿನಪತ್ರಿಕೆ
ಸಂಪೂರ್ಣ ಉಚಿತ
ಚಂದಾದಾರರಾಗಲು Add Me to JM ಎಂದು ಟೈಪ್ ಮಾಡಿ
9535283535 ಸಂಖ್ಯೆಗೆ ವಾಟ್ಸಪ್ ಮಾಡಿ.

ಜ್ಯೋತಿಷ ಮಿತ್ರ ಪ್ರಸ್ತುತಪಡಿಸುತ್ತಿದೆ




# ಪ್ರಶ್ನಶಾಸ್ತ್ರ ತರಬೇತಿ

ಸಮಯದ ನಿರ್ಬಂಧ ಇಲ್ಲದೆ, ನೀವು ಇರುವಲ್ಲಿಂದಲೇ ಪ್ರಶ್ನಶಾಸ್ತ್ರ ಕಲಿಯಿರಿ.

ಆರೂಢ ಲಗ್ನ ಚಿಂತನೆ • ವೈಯಕ್ತಿಕ ಪ್ರಶ್ನೆ • ಸ್ಥಳಪ್ರಶ್ನೆ • ವಿವಾಹಪ್ರಶ್ನೆ • ಸಂತಾನಪ್ರಶ್ನೆ • ದೃಷ್ಟಿ ಬಾಧಾ ಚಿಂತನೆ • ವಾಗ್ದೋಷ ಚಿಂತನೆ • ವಿಷಭೋಜನ ಲಕ್ಷಣ ( ಕೈವಿಷ ) • ಮಹಾಭಿಚಾರ ಮತ್ತು ಕ್ಷುದ್ರಾಭಿಚಾರ ಚಿಂತನೆ • ಸರ್ಪಬಾಧೆ ಚಿಂತನೆ • ಪ್ರೇತಬಾಧೆ ಚಿಂತನೆ •ತಾಂಬೂಲ ಪ್ರಶ್ನೆ

ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಿ

9986671473 / 9535283535

www.jyothishamithra.com



## ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ

ಗೌರವ ಸಂಪಾದಕರು : ಜೀವನ್ ಉಳ್ಳಾಲ್

ಸಂಪಾದಕರು : ಶ್ರೀಷ ಎಸ್.

ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.

PH : 9986671473 / 9535283535

jmonline@gmail.com www.jyothishamithra.com